# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1517 |
| ಮಾನ್ಯ ಸದಸ್ಯರ ಹೆಸರು | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ (ವಿಧಾನಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | 18-03-2021 |
| ಉತ್ತರಿಸಬೇಕಾದವರು | ಅಬಕಾರಿ ಸಚಿವರು |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ MSIL ಮದ್ಯದ ಮಳಿಗೆಗಳ ಮಂಜೂರಾತಿ ಕೋರಿ ಈವರೆವಿಗೂ ಸಲ್ಲಿಕೆಯಾಗಿರುವ ಅರ್ಜಿಗಳ ಸಂಖ್ಯೆ ಎಷ್ಟು; (ತಾಲ್ಲೂಕುವಾರು ವಿವರ ನೀಡುವುದು) | ಬೀದರ್ ಜಿಲ್ಲೆಯಲ್ಲಿ MSIL ಮದ್ಯದ ಮಳಿಗೆಗಳ ಮಂಜೂರಾತಿ ಕೋರಿ ಈವರೆವಿಗೂ ಒಟ್ಟು 32 ಅರ್ಜಿಗಳು ಸಲ್ಲಿಕೆಯಾಗಿದ್ದು, ತಾಲ್ಲೂಕುವಾರು ವಿವರವನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಆ) | ಈ ಅರ್ಜಿಗಳ ಪೈಕಿ ಎಷ್ಟು ಅರ್ಜಿದಾರರಿಗೆ ಹೊಸ MSIL ಮದ್ಯದ ಅಂಗಡಿಗಳನ್ನು ಮಂಜೂರು ಮಾಡಲಾಗಿದೆ; ಮಂಜೂರಾಗದೇ ಉಳಿದ ಅರ್ಜಿಗಳೆಷ್ಟು; ಮಂಜೂರಾಗದಿರಲು ಕಾರಣಗಳೇನು; (ತಾಲ್ಲೂಕುವಾರು ಸಂಪೂರ್ಣ ವಿವರ ನೀಡುವುದು) | ಸಲ್ಲಿಕೆಯಾದ 32 ಅರ್ಜಿಗಳ ಪೈಕಿ 30 ಅರ್ಜಿಗಳಿಗೆ ಸಿಎಲ್-11ಸಿ ಸನ್ನದು ಮಂಜೂರು ಮಾಡಲಾಗಿದ್ದು, ಘಾಟಬೋರಾಳ ಗ್ರಾಮದ ಅರ್ಜಿಗೆ ಸಿಎಲ್-11ಸಿ ಸನ್ನದು ಮಂಜೂರು ಮಾಡಲು ಪೂರ್ವಾನುಮತಿ ನೀಡಲಾಗಿದೆ. ಉಳಿದ 01 ಅರ್ಜಿಯು ಬೆಮಳಖೇಡ ಗ್ರಾಮಕ್ಕೆ ಸಂಬಂಧಿಸಿದ್ದು, ಪರಿಶೀಲನಾ ಹಂತದಲ್ಲಿರುತ್ತದೆ. ತಾಲ್ಲೂಕುವಾರು ವಿವರಗಳನ್ನು **ಅನುಬಂಧದಲ್ಲಿ** ನೀಡಲಾಗಿದೆ. |
| ಇ) | ಅರ್ಜಿದಾರರಿಗೆ ಹೊಸ MSIL ಮದ್ಯದ ಅಂಗಡಿಗಳನ್ನು ಮಂಜೂರು ಮಾಡಲು ಸರ್ಕಾರ ಅನುಸರಿಸುವ ಮಾನದಂಡಗಳೇನು; ಹೊಸ ಮಳಿಗೆಗಳನ್ನು ಮಂಜೂರು ಮಾಡಲು | ರಾಜ್ಯದಲ್ಲಿ ಎಂ.ಎಸ್.ಐ.ಎಲ್ ಸನ್ನದುಗಳನ್ನು ಮಂಜೂರು ಮಾಡಲು ಸರ್ಕಾರ ಅನುಸರಿಸುವ ಮಾರ್ಗಸೂಚಿಗಳು ಕೆಳಕಂಡಂತಿವೆ:<br>i. ಎಂ.ಎಸ್.ಐ.ಎಲ್ ಮಳಿಗೆಗಳನ್ನು ಕರ್ನಾಟಕ ಅಬಕಾರಿ (ಭಾರತೀಯ ಮತ್ತು ವಿದೇಶಿ ಮದ್ಯಗಳ ಮಾರಾಟ) |

| | | |
|---|---|---|
| | ಸರ್ಕಾರ ರೂಪಿಸಿರುವ ಮಾರ್ಗಸೂಚಿಗಳೇನು? (ಮಾಹಿತಿ ಒದಗಿಸುವುದು) | ನಿಯಮಗಳು, 1968 ರ ನಿಯಮ-3(11-ಸಿ), 8, 8(ಎ) ಹಾಗೂ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ-5ರ ಪ್ರಕಾರ ನಿಬಂಧನೆಗಳನ್ನು ಪಾಲಿಸಿ ಮಂಜೂರು ಮಾಡಲು ಪೂರ್ವಾನುಮತಿ ನೀಡಲಾಗುವುದು.<br><br>ii. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 07 ಇಎಫ್‌ಎಲ್ 2008 ದಿನಾಂಕ: 03.07.2009 ರಲ್ಲಿ ಪ್ರತಿ ತಾಲ್ಲೂಕಿಗೆ ಕನಿಷ್ಠ 2 ರಂತೆ 352 ಸನ್ನದುಗಳು, ಜಿಲ್ಲಾ ಕೇಂದ್ರಸ್ಥಾನಕ್ಕೆ 2 ರಂತೆ 58 ಸನ್ನದುಗಳು ಹಾಗೂ ಎಂಎಸ್‌ಐಎಲ್ ಸಂಸ್ಥೆ ಪ್ರಾದೇಶಿಕ ಬೇಡಿಕೆ ಅಧ್ಯಯನ ಆಧರಿಸಿ ಕೋರಿಕೆ ಸಲ್ಲಿಸುವ ಸ್ಥಳಗಳಿಗೆ 53 ಸನ್ನದುಗಳಂತೆ ಒಟ್ಟು 463 ಸನ್ನದುಗಳನ್ನು ಹಂಚಿಕೆ ಮಾಡಲಾಗಿದೆ.<br><br>iii. ಮುಂದುವರೆದು, ಸರ್ಕಾರದ ಪತ್ರ ಸಂಖ್ಯೆ: ಎಫ್‌ಡಿ 15 ಇಎಫ್‌ಎಲ್ 2015 ದಿ:23.09.2016 ರಲ್ಲಿ ಕೆಳಕಂಡ ಷರತ್ತುಗಳ ಮೇಲೆ ಎಂ.ಎಸ್.ಐ.ಎಲ್ ಸಂಸ್ಥೆಗೆ ಒಟ್ಟು 900 ಸನ್ನದುಗಳನ್ನು ಹೆಚ್ಚುವರಿಯಾಗಿ ಮಂಜೂರು ಮಾಡಲು ಅನುಮೋದನೆ ನೀಡಲಾಗಿದೆ.<br><br>• ಎಂ.ಎಸ್.ಐ.ಎಲ್ ಸಂಸ್ಥೆಯೇ ತನ್ನ ವಾಣಿಜ್ಯ ಕಾರ್ಯಸಾಧ್ಯತೆಗೆ ಅನುಗುಣವಾಗಿ ಸನ್ನದುಗಳ ಸ್ಥಳವನ್ನು ನಿಗಧಿಗೊಳಿಸುವುದು. ಎಂ.ಎಸ್.ಐ.ಎಲ್ ಸಂಸ್ಥೆಯ ಅಧಿಕಾರಿಗಳು ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ಮದ್ಯದಂಗಡಿಗಳನ್ನು ತೆರೆಯುವ ನಿರ್ದಿಷ್ಟ ಸ್ಥಳಗಳನ್ನು ಗುರುತಿಸುವುದು.<br>• ಈ ರೀತಿ ಗುರುತಿಸುವ ಸ್ಥಳಗಳು ಸರ್ಕಾರವು ತಿಳಿಸಿರುವ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲೇ ಇರಬೇಕು ಹಾಗೂ ನಿಗದಿಪಡಿಸಿರುವ ಸಂಖ್ಯೆಯ ಮಿತಿಯಲ್ಲೇ ಇರಬೇಕು.<br>• ಒಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಿಂದ ಮತ್ತೊಂದು ವಿಧಾನಸಭಾ ಕ್ಷೇತ ವ್ಯಾಪ್ತಿಗೆ ವರ್ಗಾವಣೆ ಆಗದಂತೆ ನೋಡಿಕೊಳ್ಳತಕ್ಕದ್ದು.<br>• ಎಂ.ಎಸ್.ಐ.ಎಲ್ ಸಂಸ್ಥೆಯಿಂದ ಸನ್ನದು ಸ್ಥಳಗಳನ್ನು ಗುರುತಿಸಿ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಿದ |

| | | |
|---|---|---|
| | | ನಂತರ ಅಂತಹ ಸನ್ನದು ಸ್ಥಳಗಳು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 ರನ್ವಯ ಆಕ್ಷೇಪಣಾ ರಹಿತ ಸ್ಥಳದಲ್ಲಿರುವಂತೆ ಹಾಗೂ ಇತರೆ ಸಂಬಂಧಿಸಿದ ನಿಯಮಗಳಿಗೆ ಪೂರಕವಾಗಿರುವಂತೆ ಸಂಬಂಧಪಟ್ಟ ಅಬಕಾರಿ ಉಪ. ಆಯುಕ್ತರು ನೋಡಿಕೊಳ್ಳುವುದು.<br>iv. ಮುಂದುವರೆದು, ಸರ್ಕಾರದ ಪತ್ರ ಸಂಖ್ಯೆ: ಎಫ್‌ಡಿ 08 ಇಎಫ್‌ಎಲ್ 2020 ದಿ:08.09.2020 ರಲ್ಲಿ ಈಗಾಗಲೇ ಮಂಜೂರು ಮಾಡಿರುವ ಒಟ್ಟು 900 ಸನ್ನದುಗಳ ಪೈಕಿ ಬಾಕಿ ಉಳಿದಿರುವ 441 ಸನ್ನದುಗಳನ್ನು ಕೆಳಕಂಡ ಷರತ್ತುಗಳ ಮೇಲೆ ಪ್ರಾರಂಭಿಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.<br>• ಎಂ.ಎಸ್.ಐ.ಎಲ್ ಸಂಸ್ಥೆಯೇ ತನ್ನ ವಾಣಿಜ್ಯ ಕಾರ್ಯಸಾಧ್ಯತೆಗೆ ಅನುಗುಣವಾಗಿ ಸನ್ನದುಗಳ ಸ್ಥಳವನ್ನು ನಿಗಧಿಗೊಳಿಸುವುದು. ಎಂ.ಎಸ್.ಐ.ಎಲ್ ಸಂಸ್ಥೆಯ ಅಧಿಕಾರಿಗಳು ಕರ್ನಾಟಕ ಅಬಕಾರಿ ಕಾಯ್ದೆಯನ್ವಯ ಮದ್ಯದಂಗಡಿಗಳನ್ನು ತೆರೆಯುವ ನಿರ್ದಿಷ್ಟ ಸ್ಥಳಗಳನ್ನು ಗುರುತಿಸುವುದು.<br>• ಸಿಎಲ್-11(ಸಿ) ಕೋಟಾದಲ್ಲಿನ ಬಾಕಿ ಇರುವ 441 ಚಿಲ್ಲರೆ ಮದ್ಯ ಮಾರಾಟ ಸನ್ನದುಗಳ ಪೈಕಿ ಯಾವುದಾದರೂ ಸನ್ನದನ್ನು ಒಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯಿಂದ ಮತ್ತೊಂದು ವಿಧಾನಸಭಾ ಕ್ಷೇತ್ರ ವ್ಯಾಪ್ತಿಗೆ ವರ್ಗಾವಣೆ ಮಾಡುವುದಾದಲ್ಲಿ ಅದೇ ಜಿಲ್ಲೆಯ ಬೇರೆ ಯಾವುದಾದರೂ ಅಗತ್ಯವಿರುವ ವಿಧಾನಸಭಾ ಕ್ಷೇತ್ರಕ್ಕೆ ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) ನಿಯಮಗಳು, 1967ರ ನಿಯಮ 5 ರನ್ವಯ ಆಕ್ಷೇಪಣಾ ರಹಿತ ಸ್ಥಳಕ್ಕೆ ದಿನಾಂಕ:31.12.2020 ರೊಳಗೆ ವರ್ಗಾವಣೆ ಮಾಡಿಕೊಳ್ಳತಕ್ಕದ್ದು.<br>• ಎಂ.ಎಸ್.ಐ.ಎಲ್ ಸಂಸ್ಥೆಯಿಂದ ಸನ್ನದು ಸ್ಥಳಗಳನ್ನು ಗುರುತಿಸಿ ಅಬಕಾರಿ ಇಲಾಖೆಗೆ ಸಲ್ಲಿಸಿದ ನಂತರ ಅಂತಹ ಸನ್ನದು ಸ್ಥಳಗಳು ಕರ್ನಾಟಕ ಅಬಕಾರಿ (ಸನ್ನದುಗಳ ಸಾಮಾನ್ಯ ಷರತ್ತುಗಳು) |

| | | |
|---|---|---|
| | | ನಿಯಮಗಳು, 1967ರ ನಿಯಮ 5 ರನ್ವಯ ಆಕ್ಷೇಪಣಾ ರಹಿತ ಸ್ಥಳದಲ್ಲಿರುವಂತೆ ಹಾಗೂ ಇತರೆ ಸಂಬಂಧಿಸಿದ ನಿಯಮಗಳಿಗೆ ಪೂರಕವಾಗಿರುವಂತೆ ಸಂಬಂಧಪಟ್ಟ ಅಬಕಾರಿ ಉಪ ಆಯುಕ್ತರು ನೋಡಿಕೊಳ್ಳತಕ್ಕದ್ದು. |

ಆಇ 42 ಇಎಲ್‌ಕ್ಯೂ 2021

(ಕೆ. ಗೋಪಾಲಯ್ಯ)
ಅಬಕಾರಿ ಸಚಿವರು

| ಅನುಬಂಧ | | | | | | | | |
|---|---|---|---|---|---|---|---|---|
| ಬೀದರ ಜಿಲ್ಲೆಯಲ್ಲಿ ಈವರೆಗೂ ಸ್ವೀಕೃತವಾದಂತಹ ಹಾಗೂ ಮಂಜೂರಾದ ಎಂಎಸ್ಐಎಲ್ ಪ್ರಸ್ತಾವನೆಗಳು (ಅರ್ಜಿಗಳು) – 463 & 900 ಕೋಟಾ ಒಳಗೊಂಡಂತೆ | | | | | | | | |
| ಕ್ರ ಸಂ. | ಜಿಲ್ಲೆ | ತಾಲ್ಲೂಕು | ಸ್ವೀಕೃತವಾಗಿರುವ ಅರ್ಜಿಗಳ ಸಂಖ್ಯೆ | | | ಸ್ವೀಕೃತವಾಗಿರುವ ಅರ್ಜಿಗಳ ಪೈಕಿ ಮಂಜೂರು/ಪೂರ್ವಾನುಮತಿ ನೀಡಲಾಗಿರುವ ಅರ್ಜಿಗಳ/ಸನ್ನದುಗಳ ಸಂಖ್ಯೆ | | |
| | | | 463 ಕೋಟಾದಡಿ | 900 ಕೋಟಾದಡಿ | ಒಟ್ಟು | 463 ಕೋಟಾದಡಿ | 900 ಕೋಟಾದಡಿ | ಒಟ್ಟು |
| 1 | ಬೀದರ್ | ಬೀದರ್ | 4 | 7 | 11 | 4 | 7 | 11 |
| 2 | | ಭಾಲ್ಕಿ | 1 | 2 | 3 | 1 | 2 | 3 |
| 3 | | ಬಸವಕಲ್ಯಾಣ | 3 | 5 | 8 | 3 | 5 | 8 |
| 4 | | ಹುಮನಾಬಾದ್ | 2 | 3 | 5 | 2 | 2 | 4 |
| 5 | | ಔರಾದ್ | 2 | 3 | 5 | 2 | 3 | 5 |
| ಜಿಲ್ಲೆಯ ಒಟ್ಟು | | | 12 | 20 | 32 | 12 | 19 | 31 |

ಆಇ 42 ಇಎಲ್‌ಕ್ಯೂ 2021